# 42

# ಕಾಲುಬಳೆಯು ಕತೆ

ಅನುವಾದಕಿ:

ಶ್ರೀಮತಿ ಬಿ. ಎಸ್. ರತ್ನಮ್ಮ

ಮಂಗಳೂರು.

1955.




ಒಂದಾಣೆ ಮಾಲೆ

# ...ಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು
೧೮. ಜಗಳಗಂಟ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. *ಭಾರತದ ಮಹಾನಗರಗಳು, ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು
೨೪. ಭಾರತದ ಮಹಾನಗರಗಳು (ಭಾಗ ೨
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು
೨೬. ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧ ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು
೩೫. ಶರಾಬಿನ ಪೀಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು
೪೨. ಕಾಲುಬಳೆಯ ಕಥೆ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ನಾಲ್ವತ್ತೆರಡು ಪುಸ್ತಕಗಳಲ್ಲಿ, ನಾಲ್ವತ್ತೆರಡು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 936 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-

# ಪ್ರಸ್ತಾವನೆ.

---

ತಮಿಳು ಭಾಷೆ ಇಂದು ಜೀವಂತವಾಗಿ ವ್ಯವಹಾರದಲ್ಲಿರುವ ಭಾಷೆಗಳಲ್ಲಿ ಅತಿ ಪ್ರಾಚೀನವಾದುದು. ಆ ಭಾಷೆಯಲ್ಲಿ ಇರುವಷ್ಟು ಸ್ವತಂತ್ರವಾದ ಶಬ್ದಸಂಪತ್ತಿ ಇನ್ನಾವ ಭಾಷೆಯಲ್ಲಿಯೂ ಇಲ್ಲವೆಂಬ ಮಾತು ಅತಿಶಯೋಕ್ತಿಯಲ್ಲ. ಭಾಷೆಯಂತೆಯೇ ಅದರ ಸಾಹಿತ್ಯವೂ ಅತಿ ಪ್ರಾಚೀನ. ಒಂದನೆಯ ಎರಡನೆಯ ಶತಮಾನಗಳಲ್ಲೇ ತಮಿಳಿನಲ್ಲಿ ಉತ್ತಮವಾದ ಸ್ವತಂತ್ರ ಕಾವ್ಯ ಗ್ರಂಥಗಳು ಪ್ರಕಟವಾಗಿದ್ದುವು. ತಮಿಳಿನ ಪ್ರಾಚೀನ ಪಂಚ ಮಹಾಕಾವ್ಯಗಳಲ್ಲಿ 'ಶಿಲಪ್ಪದಿಕಾರಂ' ಎಂಬ ಮಹಾಕಾವ್ಯವು ಅತ್ಯಂತ ಪ್ರಸಿದ್ಧವಾದುದು. ಈ ಮಹಾಕಾವ್ಯವನ್ನು ಕಾವ್ಯದ ಕತೆ ನಡೆದ ಕಾಲದಲ್ಲೇ ಜೀವಿಸುತ್ತಿದ್ದ ಇಳಂಗೋಅಡಿಗಳ್ ಎಂಬ ಜೈನ ಸನ್ಯಾಸಿ ಬರೆದರು. ಇವರು ಇದೇ ಕಾವ್ಯದಲ್ಲಿ ಬರುವ ಶೆಂಗುಟ್ಟುವನ್ ಚೇರನ ಅನುಜರಾಗಿದ್ದು ವಿರಕ್ತರಾದವರು. ಇದು ಪುರಾಣಕಾವ್ಯವಲ್ಲ. ಕವಿಕಲ್ಪನೆಯ ಕೃತ್ರಿಮ ಕೃತಿಯೂ ಅಲ್ಲ; ಕವಿಯ ಕಾಲದಲ್ಲೇ ನಡೆದಿರಬಹುದಾದ ಕವಿ ಕರ್ಮದ ಮೆರುಗಿನಿಂದ ಮೆರೆಯುವ ಪ್ರಕೃತಿಕಾವ್ಯ. ಇದರಲ್ಲಿ ಆ ಕಾಲದ ತಮಿಳು ನಾಡಿನ ರೀತಿನೀತಿ, ಧರ್ಮಕರ್ಮ, ಕಾವ್ಯಕಲೆ, ನೃತ್ಯಗೀತ, ವ್ಯಾಪಾರ ವ್ಯವಹಾರ ಮೊದಲಾದ ಸರ್ವವಿಷಯಗಳೂ ಸಮಾವೇಶವಾಗಿವೆ. ತಮಿಳು ನಾಡಿನ ಮೂರು ಮಹಾರಾಜ್ಯಗಳಾದ ಚೋಳ, ಪಾಂಡ್ಯ, ಚೇರಗಳ ವಿಷಯವೆಲ್ಲ ಇದರಲ್ಲಿ ಅಡಕವಾಗಿದೆ. ಮೂರು ವಿಷಯಗಳು ಇದರಲ್ಲಿ ಪ್ರತಿವಾದಿತವಾಗಿವೆ. ಮೊದಲನೆಯದು:— ಕರ್ಮಫಲವನ್ನು ಉಂಡೇತೀರಬೇಕೆಂಬುದು; ಎರಡನೆಯದು:— ಪತಿವ್ರತಾ ಧರ್ಮದ ಮಹತ್ವ; ಮೂರನೆಯದು:— ರಾಜ್ಯಶಾಸಕರು ಕರ್ತವ್ಯಪರಾಯಣರಾಗಿರಬೇಕೆಂದು. ಇನ್ನು ಕಾವ್ಯದ ಹೆಸರೋ ಅದು ನವನೂತನ 'ಶಿಲಪ್ಪದಿಕಾರಂ'. ಕಾಲಬಳೆಗೆ ಸಂಬಂಧಿಸಿದ ಕಾವ್ಯ. ಈ ಕಾವ್ಯವನ್ನು ಚೋರರಾಜ ಶೆಂಗುಟ್ಟುವನ್ ಚೇರನ ತಮ್ಮ ಜೈನಸಾಧು ಇಳಂಗೋ ಅಡಿಗಳ್ ಎಂಬವರು ಬರೆದರು. ಅದರ ಸಂಗ್ರಹಾನುವಾದವಿದು.

— ಲೇಖಕಿ.

---

# "ಶಿಲಪ್ಪದಿಕಾರಂ"

ಅಥವಾ

# ಕಾಲುಬಳೆಯ ಕತೆ

ಬಡಗು ದಿಕ್ಕಿನಲ್ಲಿ ತಿರುವೆಂಗಡ(ತಿರುಪತಿ)ವೂ, ತೆಂಕಲಲ್ಲಿ ಕನ್ಯಾಕುಮಾರಿಯೂ, ಮೂಡುಪಡುಗಳಲ್ಲಿ ಮೂಡು ಪಡುವಣ ಕಡಲುಗಳೂ ಮೇರೆಯಾಗಿ ತಮಿಳುನಾಡು ಉದ್ದಗಲಕ್ಕೆ ಹರಡಿರುವುದು. ಈ ನಾಡಿನಲ್ಲಿ ಹರಿಯುವ ಹೊಳೆಕೆರೆಗಳು ಯಾವಾಗಲೂ ತಿಳಿನೀರಿನಿಂದ ತುಂಬಿರುತ್ತವೆ. ಇಲ್ಲಿನ ನೆಲ ಸದಾಕಾಲವು ಹಸುರುಹಚ್ಚೆಗಳಿಂದ ಕಂಗೊಳಿಸುವುದು; ಗುಡ್ಡಬೆಟ್ಟಗಳು ಹಲವು ಬಗೆಯ ಮದ್ದು ಮೂಲಿಕೆಗಳಿಂದ ತುಂಬಿಕೊಂಡಿರುವುವು. ಮಳೆಬೆಳೆಗಳಿಗೆ ಕುಂದುಕೊರತೆಯಿಲ್ಲ. ಈ ತಮಿಳು ನಾಡಿನಲ್ಲಿ ಮೂಡಲಕರೆಯಲ್ಲಿ ಚೋಳ ರಾಜ್ಯವೂ, ಪಡುವಲಕರೆಯಲ್ಲಿ ಚೇರನಾಡೂ, ನಡುವಣ ಭಾಗದಲ್ಲಿ ಪಾಂಡ್ಯ ರಾಷ್ಟ್ರವೂ ಶೋಭಿಸುತಿದ್ದುವು.

ಈ ಮೂರು ರಾಷ್ಟ್ರಗಳಲ್ಲಿ ಮೂಡಲಕರೆಯ ಚೋಳದೇಶವನ್ನು ಧಾನ್ಯದಕಣಜ ಎಂದು ಕರೆಯುತ್ತಿದ್ದರು. ಇದರ ರಾಜಧಾನಿಯನ್ನು ಕಾವೇರಿ ಪಟ್ಟಣ ಅಥವಾ ಪುಹಾರ್ ಎಂದು ಕರೆಯುತ್ತಿದ್ದರು. ಪುಹಾರ್ ಪಟ್ಟಣವು ಆ ಕಾಲದಲ್ಲಿ ದೇಶ ವಿದೇಶಗಳೊಡನೆ ವ್ಯಾಪಾರ ಮಾಡುವುದರಲ್ಲಿ ಹೆಸರುಗೊಂಡಿತ್ತು.

ವ್ಯಾಪಾರಿಗಳು ಅಲ್ಲಿಗೆ ಬಂದು ಹೋಗುತ್ತಿದ್ದರು. ಆ ಕಾಲದಲ್ಲಿ ಪುಹಾರ್ ನಗದಿ ವ್ಯಾಪಾರದ ಅತಿ ದೊಡ್ಡ ಕೇಂದ್ರವಾಗಿತ್ತು.

ಪುಹಾರ್ ನಗರದಲ್ಲಿ ಮಹಾನಾಯಕನೆಂಬ ಒಬ್ಬ ಸದ್ಗುಣಶಾಲಿಯೂ ಧಾರ್ಮಿಕನೂ ಆದ ವ್ಯಾಪಾರಿಯಿದ್ದನು. ಅವನು ಅಲ್ಲಿಯ ವ್ಯಾಪಾರಿಗಳಿಗೆಲ್ಲ ನಾಯಕನಾಗಿದ್ದನು. ಮಹಾನಾಯಕನಿಗೆ ಕಣ್ಣಕಿ ಎಂಬ ಪರಮ ಸುಂದರಿಯಾದ ಮಗಳೊಬ್ಬಳಿದ್ದಳು. ಅವಳು ಲಕ್ಷ್ಮಿಗೆ ಸಮಾನಳು,

ಸದಾಚಾರ, ಸದ್ಭಕ್ತಿಗಳಲ್ಲಿ ಅರುಂಧತೀದೇವಿಗೆ ಸಮಾನಳು. ಸಮಸ್ತ ಸ್ತ್ರೀಯರಿಂದ ಸನ್ಮಾನಗೊಳ್ಳಲು ಯೋಗ್ಯಳು. ಅವಳಿಗೆ ಹನ್ನೆರಡು ವರ್ಷ ಪ್ರಾಯವಾಗಿತ್ತು.

ಅದೇ ನಗರದಲ್ಲಿ ಉದಾರಗುಣ ಸಂಪನ್ನನಾದ ಮಹಾಸತ್ವನೆಂಬ ಇನ್ನೊಬ್ಬ ವ್ಯಾಪಾರಿಯಿದ್ದನು. ಅವನು ಮಹಾನಾಯಕನ ಪಂಕಟ್ಟಿಗೆ ಬರುವವನು. ಮಹಾಸತ್ವನಿಗೆ ಸುಂದರನೂ, ಸುಶೀಲನೂ ಆದ ಕೇವಲ ನೆಂಬ ಹದಿನಾರು ವರ್ಷದ ಮಗನಿದ್ದನು.

ಆ ಇಬ್ಬರು ಸಾಹುಕಾರರ ಕುಲಗುರುಗಳು ಒಬ್ಬರೇ. ಆ ಗುರು ಈ ಇಬ್ಬರ ಮಕ್ಕಳೊಳಗೆ ವಿವಾಹ ಸಂಬಂಧವನ್ನು ಬೆಳೆಸಲು ಸೂಚಿಸಿದರು. ಅವರಿಗೂ ಅದು ಇಷ್ಟವಾಗಿತ್ತು. ಈ ಮದುವೆಯ ದಿನ ನಿಶ್ಚಯವಾಯಿತು. ಸುಂದರಿಯರಾದ ಸ್ತ್ರೀಯರು ಆನೆಗಳ ಮೇಲೆ ಕುಳಿತು ನಗರದಲ್ಲೆಲ್ಲಾ ಮದುವೆಯ ಒಸಗೆಕೊಟ್ಟರು. ಸುಮುಹೂರ್ತದಲ್ಲಿ ಮಂಗಲವಾದ್ಯಘೋಷದೊಡನೆ ವಿವಾಹ ಮಂಗಲವು ನೆರವೇರಿತು. ನೆರೆದವರೆಲ್ಲಾ ನವದಂಪತಿಗಳನ್ನು ಮನಸಾರೆ ಹರಸಿದರು. ನವದಂಪತಿಗಳು ಸುಖವಾಗಿ ಕಾಲಕಳೆಯ ತೊಡಗಿದರು.

ವಸಂತಋತುವಿನಲ್ಲಿ ವಸಂತೋತ್ಸವ ನಡೆಯುವುದು ಪುಹಾರ್ ನಗರದಲ್ಲಿ ಹಲವು ವರ್ಷಗಳಿಂದ ನಡೆದುಬಂದ ಪದ್ಧತಿ. ಹಾಗೆಯೇ ವಸಂತೋತ್ಸವ ಪ್ರಾರಂಭವಾಯಿತು. ಆ ದಿನ ಚೋಳ ರಾಜನ ಸಭೆಯಲ್ಲಿ ಆ ನಾಡಿನಲ್ಲೆಲ್ಲ ಹೆಸರಾಂತ ನರ್ತಕಿ ಮಾಧವಿಯ ನೃತ್ಯ ಸಮಾರಂಭವನ್ನು ಏರ್ಪಡಿಸಿದ್ದರು. ನಗರದ ನಾಗರಿಕರೆಲ್ಲ ಆಮಂತ್ರಿತರಾಗಿದ್ದರು. ಕೋವಲನೂ ಆ ಸಮಾರಂಭಕ್ಕೆ ಬಂದಿದ್ದನೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ!

ರಂಗಮಂಟಪದಲ್ಲಿ ನಾಟ್ಯಾಚಾರ್ಯರು, ಕವಿಗಮಕಿಗಳು, ವೈಣಿಕರೆ ಮೊದಲಾದ ಕಲಾಭಿಜ್ಞರು ಬಂದು ಸೇರಿದ್ದರು. ನಾಟ್ಯಾಚಾರ್ಯರು ಸೂಚನೆ ಕೊಟ್ಟೊಡನೆಯೇ ವೀಣೆಯ ಇಂಚರದೊಡನೆ, ಮೃದಂಗದ ಮೃದುನಾದದೊಡನೆ ದಕ್ಷಿಣಚರಣವನ್ನು ರಂಗಕ್ಕಿರಿಸಿ ವಿದ್ಯುಲ್ಲತೆಯಂತೆ ನರ್ತಿಸುತ್ತಾ ಭುವನಮೋಹಿನಿ ಮಾಧವಿ ದೃಗ್ಗೋಚರಳಾದಳು. "ಸಮಸ್ತ ಮಂಗಲವೂ ರಾಜ್ಯಕ್ಕೆ ದೊರಕಲಿ, ಅಮಂಗಲವು ದೂರವಾಗಲಿ" ಎಂದು

ಪುಷ್ಪಾಂಜಲಿಯನ್ನಿತ್ತಳು. ಆ ನೇಲೆ ವಿವಿಧ ಮುದ್ರೆಗಳಿಂದ ಭಾವಭಂಗಿಗಳಿಂದ ಪ್ರದರ್ಶನ ಮಾಡಿದಳು. ದರ್ಶಕರು ಕಲ್ಲಿನ ಗೊಂಬೆಗಳಂತೆ, ಸ್ತಬ್ಧರಾಗಿ, ದೇವತೆಗಳಂತೆ ಎವೆಮುಚ್ಚದೆ ನೃತ್ಯವನ್ನು ನೋಡಿ ಆನಂದ ಸಾಗರದಲ್ಲಿ ತೇಲಾಡಿದರು. ಸುಖದ ಸುಗ್ಗಿಯಲ್ಲಿ ಸುತ್ತಾಡಿದರು. ನೃತ್ಯ ಸಮಾರಂಭದ ಅಂತ್ಯದಲ್ಲಿ ಸಭಾಸದರ ಸನ್ಮೋದದೊಡನೆ ಮಹಾರಾಜನು ಸಾವಿರದ ಎಂಟು ಸುವರ್ಣಮುದ್ರೆಗಳನ್ನೂ ಮರಕತ ಮಣಿಯ ಒಂದು ಹಾರವನ್ನೂ ಮಾಧವಿಗೆ ಪಾರಿತೋಷಕವಾಗಿತ್ತನು. ನೃತ್ಯಸಮಾರಂಭ ನಡೆಯುತ್ತಿದ್ದಾಗ ಯುವತಿಯಾದ ಮಾಧವಿಯ ದೃಷ್ಟಿ ಕೋವಲನ ಮೇಲೆ ಬಿತ್ತು. ಮೊದಲ ದೃಷ್ಟಿಯಲ್ಲೇ ಆಕೆಗೆ ಅವನಲ್ಲಿ ಆತ್ಮೀಯತೆಯುಂಟಾಯಿತು. ಕೋವಲನೂ ಮಾಧವಿಯ ಸೊಬಗನ್ನು ಕಂಡು ತನ್ನ ಮನೆಯನ್ನು ಮರೆತನು. ನೃತ್ಯ ಸಮಾರಂಭ ಮುಗಿದು ಹೊರಡುವಾಗ ಮಾಧವಿ ಕೋವಲನ ಬಳಿಗೆ ಬಂದು, "ನನ್ನ ಪ್ರೀತಿಯ ಗುರುತಾಗಿ ಈ ಹಾರ ನಿನ್ನಲ್ಲಿ ಇರಲಿ" ಎಂದು ತನಗೆ ಆ ದಿನ ಉಡುಗೊರೆ ಸಿಕ್ಕಿದ ಮರಕತ ಹಾರವನ್ನು ಕೋವಲನ ಕೈಗಿತ್ತು ಮುಂದೆ ನಡೆದಳು. ಆ ದಿನದಿಂದ ಕೋವಲನು ಕನ್ನಕಿಯನ್ನು ಬಿಟ್ಟು ಮಾಧವಿಯ ಮನೆಯಲ್ಲೇ ವಾಸಿಸತೊಡಗಿದನು. ಅವನು ತನ್ನ ಧರ್ಮಪತ್ನಿಯನ್ನು ಮಾತ್ರ ಮರೆತುದಲ್ಲ; ತನ್ನ ಕುಲವೃತ್ತಿಯಾದ ವ್ಯಾಪಾರ ವ್ಯವಹಾರವನ್ನೂ ಉಪೇಕ್ಷಿಸಿದನು. ಕೆಲವೇ ಕಾಲದಲ್ಲಿ ತನ್ನ ಧನಸಂಪತ್ತನ್ನು ಕಳೆದುಕೊಂಡನು.

ಇತ್ತ ಪತಿವ್ರತಾ ಶಿರೋಮಣಿಯಾದ ಕನ್ನಕಿ, ಪತಿಯೇ ದೈವವೆಂದು ನಂಬಿದ ಕನ್ನಕಿ, ಪತಿ ತನ್ನನ್ನು ತಿರಸ್ಕರಿಸಲು ತನ್ನ ಕರ್ಮಫಲವೇ ಕಾರಣವೆಂದು ಯೋಚಿಸಿ, ಸದಾ ಪತಿ ಚಿಂತೆಯಲ್ಲೇ ಕಾಲಕಳೆಯುತ್ತಿದ್ದಳು. ಅವಳು ತನ್ನ ನಿತ್ಯದ ಶೃಂಗಾರವನ್ನು ಎಲ್ಲಾ ತೆಗಿದಿಟ್ಟು ಕೇವಲ ತನ್ನ ಜೀವನಕ್ಕೆ ಬೇಕಾದಷ್ಟೇ ಅನ್ನಪಾನ ತೆಗೆದುಕೊಳ್ಳುತ್ತ ಜೀವನ ಸಾಗಿಸುತ್ತಿದ್ದಳು.

ವರ್ಷಗಳು ಉರುಳಿದುವು. ಎಂದಿನಂತೆ ವಸಂತೋತ್ಸವ ಇಂದ್ರೋತ್ಸವ ಬಂತು. ನಗರವೆಲ್ಲ ಸಂತೋಷದಿಂದ ನಲಿದಾಡತೊಡಗಿತು. ನಗರದ ಸ್ತ್ರೀಯರು ಸುಂದರವಾದ ಉಡುಪು ಧರಿಸಿ, ನಗರದ ಶ್ರೇಯಸ್ಸಿಗೋಸುಗ ಇಂದ್ರನನ್ನು ಹಾಡಿಹೊಗಳುತ್ತ, ಸಾಮೂಹಿಕ ನೃತ್ಯಮಾಡುತ್ತ

ನಗರದಲ್ಲೆಲ್ಲ ಸಂಚರಿಸಿದರು. ವಜ್ರಮಂದಿರದ ಮೇಲೆ ಇಂದ್ರಧ್ವಜವನ್ನು ಏರಿಸಿದರು. ಉತ್ಸವ ಉತ್ಸಾಹದಿಂದ ಪ್ರಾರಂಭವಾಯಿತು.

ಚೋಳ ರಾಜನು ತನ್ನ ಪತ್ನೀಪುತ್ರ ಪರಿವಾರ ಸಮೇತನಾಗಿ ಮಂಗಳ ವಾದ್ಯಘೋಷದೊಡನೆ ಕಾವೇರಿ ನದಿಯಲ್ಲಿ ಮಂಗಲಸ್ನಾನ ಮಾಡಿ, ಸ್ವರ್ಣ ಕುಂಭದಲ್ಲಿ ನಿರ್ಮಲ ಜಲವನ್ನು ತುಂಬಿಸಿ, ವಜ್ರ ಮಂದಿರಕ್ಕೆ ಹೋಗಿ ಇಂದ್ರಮೂರ್ತಿಗೆ ಅಭಿಷೇಕಮಾಡಿದನು. ಆ ಮೇಲೆ ಶಿವ, ಷಣ್ಮುಖ, ಬಲ ರಾಮ, ಕೃಷ್ಣ ಮೊದಲಾದ ದೇವಮಂದಿರಗಳಲ್ಲಿ ಪೂಜೆ ಹವನಗಳು ವಿಧಿ ಪ್ರಕಾರ ನಡೆದುವು.

ಅಂದು ಸಂಜೆಯ ವೇಳೆ ನಗರದ ನರನಾರಿಯರು ಸಮುದ್ರ ತೀರದಲ್ಲಿ ಒಟ್ಟು ಸೇರಿದರು. ಕೋವಲನೂ, ಮಾಧವಿಯೂ ಅಲ್ಲಿಗೆ ಬಂದಿದ್ದರೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ! ಅವರೂ ಉತ್ಸವದ ಉತ್ಸಾಹದಲ್ಲಿದ್ದರು. ಮಾಧವಿ ತನ್ನ ಸಖಿಯ ಕೈಯಿಂದ ವೀಣೆಯನ್ನು ತೆಗೆದು ಕೋವಲನ ಕೈಗಿತ್ತಳು. ಕೋವಲನು ತನ್ನ ಪ್ರಿಯೆಯ ಮನೋಗತವನ್ನು ಅರಿತು, ವೀಣೆಯ ತಂತಿಯನ್ನು ಝೇಂಕಾರಗೊಳಿಸಿ ಹಾಡಲು ಆರಂಭಮಾಡಿದನು. ಕಾವೇರಿ ನದಿಯ ವರ್ಣನೆ, ಚೋಳ ನಾಡಿನ ವೈಭವ ಇವನ್ನೆಲ್ಲ ವೀಣೆಯ ಇಂಪಾದ ಶ್ರುತಿಯೊಡನೆ ಸೊಗಸಾಗಿ ಹಾಡಿದನು. ಆ ಮೇಲೆ ಮಾಧವಿಗೆ ತುಸು ತಮಾಷೆ ಮಾಡಬೇಕೆಂದು ಒಂದು ಪ್ರೇಮಗೀತೆಯನ್ನು ಹಾಡಿದನು. ನಾಯಕನು ತನ್ನ ಪ್ರಿಯೆಯನ್ನು ಬಿಟ್ಟು ಬೇರೊಬ್ಬಳನ್ನು ಪ್ರೀತಿಸುತ್ತಿರುವಂತೆ ಆ ಹಾಡಿನ ಅರ್ಥ. ಅವನು ನಿಜವಾಗಿಯೂ ಮಾಧವಿಯನ್ನು ಪ್ರೀತಿಸುತ್ತಿದ್ದನು. ಈ ಕಲ್ಪನೆಯ ಹಾಡಿನಲ್ಲಿ ತಾನು ಬೇರೊಬ್ಬಳನ್ನು ಪ್ರೀತಿಸುತ್ತಿರುವಂತೆ ತೋರಿಸಿಕೊಂಡನು. ಕೋವಲನು ಹಾಡುತ್ತಿದ್ದಂತೆಯೇ ಮಾಧವಿಯ ಮನಸ್ಸು ಬಿಸಿಯಾಗತೊಡಗಿತು. ಸಿಟ್ಟು ಸಿಗುರಿತು.

ಮಾಧವನು ಹಾಡು ಮುಗಿಸಿ ವೀಣೆಯನ್ನು ಮಾಧವಿಯ ಕೈಗಿತ್ತನು. ಅವಳು ವೀಣೆಯನ್ನು ತೆಗೆದುಕೊಂಡು ತಾನೂ ಒಂದು ಹಾಡು ಹಾಡಿದಳು. ಅದರಲ್ಲಿ ಅವಳು ತಾನು ಬೇರೊಬ್ಬನನ್ನು ಪ್ರೀತಿಸುವಂತೆ ವ್ಯಂಗ್ಯವಾಗಿ ಸೂಚಿಸಿದ್ದಳು. ಕೋವಲನಿಂದ ಈ ವ್ಯಂಗ್ಯವನ್ನು ಸಹಿಸಲಾಗಲಿಲ್ಲ. ಅವನ ಮನಸ್ಸಿನಲ್ಲಿ ಮಾಧವಿಯ ಪ್ರೇಮದ ವಿಷಯವಾಗಿ ಸಂದೇಹದ ಸರ್ಪ ತಲೆಯೆತ್ತಿತು; ವಿಷವನ್ನು ಕಾರಿತು. ಈಕೆ ಎಷ್ಟಾದರೂ ನರ್ತಕಿ, ಇವಳಲ್ಲಿ

ನಿಜವಾದ ಪ್ರೇಮ ಎಲ್ಲಿಂದ ಬರಬೇಕು? ಅವಳಿಗೆ ಪ್ರೀತಿಯಿದ್ದರೆ ನನ್ನ ಸಂಪತ್ತಿನ ಮೇಲೆ ಇದ್ದಿರಬಹುದು. ಆ ಸಂಪತ್ತು ಈಗ ಇಲ್ಲದ ಮೇಲೆ ಪ್ರೇಮವೆಲ್ಲಿ ಉಳಿಯಬೇಕು ಎಂದು ಚಿಂತಿಸಿ, ಆಗಲೇ ಅಲ್ಲಿಂದ ಮಾಧವಿಯನ್ನು ಬಿಟ್ಟು ತನ್ನ ಸ್ವಂತ ಮನೆಗೆ ತನ್ನ ಧರ್ಮಪತ್ನಿ ಕನ್ನಕಿಯ ಬಳಿಗೆ ನಡೆದನು. ಸಣ್ಣದೊಂದು ಪರಿಹಾಸದಿಂದ ಈ ಬಗೆಯದು ಪರಿಣಾಮವಾಗುವುದೆಂದು ಮಾಧವಿಯಾದರೂ ಯೋಚಿಸಿದಳೇ? ಇಲ್ಲ. ತನ್ನ ಪ್ರಿಯನು ತನ್ನನ್ನು ಬಿಟ್ಟುಹೋದನೆಂದು ತಿಳಿದೊಡನೆಯೆ ಅವಳಿಗೆ ವಜ್ರಾಘಾತವಾದಂತಾಯಿತು.

ಸಂಪತ್ತನ್ನು ಕಳಕೊಂಡು ಮನೆಸೇರಿದ ಪತಿ ಕೋವಲನನ್ನು ಪತಿವ್ರತೆಯಾದ ಕನ್ನಕಿ ಬಹಳ ಆದರದಿಂದ ಬರಮಾಡಿಕೊಂಡಳು. ಕಳೆದುಹೋದ ತನ್ನ ದೇವರು ತನ್ನ ಕೈಸೇರಿದಂತಾಯಿತು ಅವಳಿಗೆ. ಅವಳ ಶುದ್ಧ ಪ್ರೇಮವನ್ನು ಕಂಡು ಕೋವಲನೂ ಲಜ್ಜೆಯಿಂದ ತಲೆಬಾಗಿದನು. ತಾನು ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪಪಟ್ಟನು. ಧನಸಂಪತ್ತನ್ನೂ ಮಾನಸಂಪತ್ತನ್ನೂ ಕಳಕೊಂಡು ಮನೆ ಸೇರಿದ ತನ್ನನ್ನು ಕ್ಷಮಿಸೆಂದು ಬೇಡಿಕೊಂಡನು.

ಪತಿಯ ಪಶ್ಚಾತ್ತಾಪಕ್ಕಾಗಿ ದುಃಖಿತೆಯಾದ ಕನ್ನಕಿ ಪತಿಯನ್ನು ಸಮಾಧಾನಪಡಿಸುತ್ತ "ಪತಿದೇವ, ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ. ಧೈರ್ಯದಿಂದ ವರ್ತಿಸಿದರೆ ದೈವಸಹಾಯವೊದಗುವುದು. ಈಗ ನಿಮಗೆ ಬೇಕಾದರೆ ನನ್ನ ಬಳಿ ಬೆಲೆಬಾಳುವ ಕಾಲುಬಳೆಗಳಿವೆ. ಅವನ್ನು ತೆಗೆದುಕೊಂಡು ಬೇಕಾದಂತೆ ಉಪಯೋಗಿಸಿರಿ" ಎಂದು ನಿಟ್ಟುಸಿರು ಬಿಟ್ಟಳು.

"ಪ್ರಿಯೆ, ಈ ಕಾಲಬಳೆಯನ್ನು ತೆಗೆದುಕೊಳ್ಳದೆ ಉಪಾಯವಿಲ್ಲ. ಅಲ್ಲದೆ, ನೀನು ಪ್ರೀತಿಯಿಂದ ಕೊಟ್ಟ ಕಾಣಿಕೆಯದು. ಇದನ್ನೇ ನನ್ನ ಹೊಸಜೀವನದ ಪ್ರಾರಂಭಕ್ಕೆ ಉಪಯೋಗಿಸುತ್ತೇನೆ. ಇನ್ನು ನಾನಿಲ್ಲಿ ನಿಲ್ಲಲಾರೆ. ನಾನು ಸಕಲ ಸಂಪತ್ತನ್ನು ಕಳೆದುಕೊಂಡ ಮೇಲೆ ಇಲ್ಲಿ ನಿಲ್ಲಲಾರೆ. ಇನ್ನು ಈ ನಾಡು ನನಗೆ ಕಾಡು. ಆದುದರಿಂದ ನಾನು ಇಂದೇ ಈ ನಾಡನ್ನು ಬಿಟ್ಟು ಪಾಂಡ್ಯರಾಜ್ಯಕ್ಕೆ ಹೊರಟು, ಅಲ್ಲಿಗೆ ಹೋಗಿ ಈ ಕಾಲುಬಳೆಯನ್ನು ಮಾರಿ, ಬಂದ ಹಣದಿಂದ ವ್ಯಾಪಾರ ಪ್ರಾರಂಭಿಸುವೆನು. ನೀನು

ನನ್ನೊಡನೆಯೇ ಬಾ, ಕಷ್ಟವೋ ಸುಖವೋ ಇನ್ನು ಮುಂದೆ ನಮ್ಮ ಜೀವನ ಬೇರೆಯಲ್ಲ, ಒಂದೇ" ಎಂದನು.

ಕೋವಲನೂ ಕನ್ನಕಿಯೂ ಅಂದೇ ರಾತ್ರಿ ಬೆಳಗಾಗುವ ಮೊದಲೇ ಯಾರಿಗೂ ಹೇಳದೆ ಪುಹಾರ್ ನಗರಿಯನ್ನು, ತಮ್ಮ ತಾಯ್ನಾಡನ್ನು ಬಿಟ್ಟು ಪಾಂಡ್ಯ ರಾಜ್ಯಕ್ಕೆ ಹೊರಟರು. ಮನೆಯಿಂದ ಹೊರಟೊಡನೆಯೇ ಎದುರಿಗಿದ್ದ ಕೃಷ್ಣಮಂದಿರಕ್ಕೆ ಪ್ರದಕ್ಷಿಣೆ ಬಂದು, ಮುಂದೆ ಜೈನರ ಅರ್ಹತ್ ಮಂದಿರವನ್ನು, ಬೌದ್ಧವಿಹಾರವನ್ನು ವಂದಿಸಿ ಸಾಮಾನ್ಯ ಯಾತ್ರಿಕರಂತೆ ಕಾಲ್ನಡೆಯಲ್ಲಿ ಮುಂದೆ ನಡೆದರು. ಕಡೆಯ ಬಾರಿಗೆ ತಾಯ್ನಾಡಿಗೆ ವಂದನೆ ಸಲ್ಲಿಸಿ ನಗರದಿಂದ ಹೊರಬಂದರು.

ಬೆಳಕುಹರಿಯುವ ಹೊತ್ತಿಗೆ ಅವರು ನಗರದ ಹೊರಗಿನ ಉದ್ಯಾನಕ್ಕೆ ಬಂದರು. ಆ ಉದ್ಯಾನದಲ್ಲಿ ಕವುಂಡಿ ಅಡಿಗಳ್ ಎಂಬ ಜೈನ ಭಿಕ್ಷುಕಿ ತಪಸ್ಸುಮಾಡುತ್ತಿದ್ದಳು. ಕನ್ನಕಿ—ಕೋವಲರು ಆ ತಪಸ್ವಿನಿಗೆ ವಂದಿಸಿ, ತಾವು ಮಧುರೆಗೆ ಹೊರಟ ವಿಷಯವನ್ನು ತಿಳಿಸಿದರು. ಈ ದಂಪತಿಗಳ ವೃತ್ತಾಂತ ಕೇಳಿ ಆ ಸನ್ಯಾಸಿನಿಗೆ ಕೂಡ ವ್ಯಸನವಾಯಿತು. ಕವುಂಡಿ ಅಡಿಗಳ್ ತನಗೆ ತಮಿಳುನಾಡಿಯ ತಾಯ್ನೆಲೆಯಾದ ಮಧುರೆಗೆ ಬರ ಬೇಕೆಂದು ಅಪೇಕ್ಷೆಯಿದೆಯೆಂದು ಹೇಳಿ, ಅವರೊಡನೆ ಹೊರಡಲು ಅನುವಾದಳು.

ಆ ದಿನ ಕನಕಿ-ಕೋವಲರು ಉದ್ಯಾನದಲ್ಲಿ ಉಳಕೊಂಡು ಮರುದಿನ ಕವುಂಡಿ ಅಡಿಗಳ್‌ಳೊಡನೆ ಮಧುರೆಯ ದಾರಿಹಿಡಿದರು. ಕವುಂಡಿ ಅಡಿ ಗಳ್ ದಾರಿ ನಡೆಯುತ್ತ ಆ ದಂಪತಿಗಳಿಗೆ ಜೈನಧರ್ಮದ ಮಹತ್ವವನ್ನು ತಿಳಿಯಹೇಳಿದಳು. ಮತ್ತು ಒಂದು ಮಂತ್ರವನ್ನು ಹೇಳಿಕೊಟ್ಟು, ಆ ಮಂತ್ರವನ್ನು ಜಪಿಸುತ್ತಿದ್ದರೆ, ನಿಮಗೆ ದಾರಿಯಲ್ಲಿ ಯಾವ ಬಗೆಯ ಬಾಧೆಯೂ ತಟ್ಟದೆಂದೂ ಧೈರ್ಯಹೇಳಿದಳು.

ಕಬ್ಬಿನ ತೋಟಗಳೂ, ಬತ್ತದ ಹೊಲಗಳೂ, ಹಸುರುವಾಣಿಯ ಕೆಳಗಳೂ, ಸಾಗರದಂತೆ ತುಂಬಿ ಹರಿಯುತ್ತಿರುವ ಕಾವೇರಿ ನದಿ ಮತ್ತು ಅದರ ಉಪನದಿಗಳೂ, ಆ ಮೂವರು ಯಾತ್ರಿಕರ ಮಾರ್ಗಾಯಾಸವನ್ನು ಪರಿಹರಿಸಿದುವು. ಹೊಲಗದ್ದೆಗಳಲ್ಲಿ ಗೇಯುತ್ತಿದ್ದ ಹಳ್ಳಿಗಳ ಹೆಂಗುಸರ,

ಗಂಡಸರ ಇಂಪಾದ ಹಾಡುಗಳೂ ಅವರ ಮನಸ್ಸಿಗೆ ಸಂತಸವನ್ನು ಉಂಟು ಮಾಡಿದುವು. ಮುಂದೆ ಆ ಮೂವರು ಪವಿತ್ರವಾದ ಯಜ್ಞಕುಂಡಗಳಿಂದ ಶೋಭಿಸುವ ಬ್ರಾಹ್ಮಣರ ಅಗ್ರಹಾರವನ್ನು ದಾಟಿ ಮುಂದೆ ಬಂದು ಒಕ್ಕಲಿಗರ ಹಳ್ಳಿಗೆ ಹೋದರು. ಅಲ್ಲಿ ಆ ಒಕ್ಕಲಿಗರು ತಮ್ಮಲ್ಲಿಗೆ ಬಂದ ಅತಿಥಿಗಳನ್ನು ತೃಪ್ತಿಗೊಳಿಸಿ ಕಳುಹಿಸಿದರು.

ಮುಂದೆ ದಾರಿ ನಡೆಯುತ್ತ ಆ ಮೂವರೂ ಒಂದು ರಾತ್ರಿ ಕಾಳಿಕೋಟೆ ಎಂಬ ಹಳ್ಳಿಯಲ್ಲಿ ತಂಗಿದರು. ಅಲ್ಲಿ ಮರವರ ಜಾತಿಯ ಶಾಲಿನಿ ಎಂಬ ಕನ್ನೆಯ ಮೈಮೇಲೆ ಅವರ ಕುಲದೇವಿಯ ಆವೇಶವಾಯಿತು. ಅವಳು ದರ್ಶನಬರುತ್ತ "ನೀವು ಕುಲದೇವಿಯನ್ನು ಮರೆತಿರಿ. ಆಕೆಗೆ ಬಲಿ ಕೊಡಲಿಲ್ಲ. ಆಕೆಯನ್ನು ಪೂಜಿಸಲಿಲ್ಲ. ಅದರಿಂದಾಗಿ ನಿಮ್ಮ ವೀರತ್ವ ನಾಶವಾಯಿತು. ನೀವು ಈಗಲೇ ದೇವಿಯ ಬಲಿ ಪೂಜೆಗಳನ್ನು ನೆರವೇರಿಸಿರಿ. ಇಲ್ಲವಾದರೆ ಸುಖ ಸಿಗಲಾರದು" ಎಂದು ನುಡಿದಳು.

ದೇವಿಯ ಆವೇಶಗೊಂಡ ಶಾಲಿನಿಯ ಮಾತು ಕೇಳಿದೊಡನೆಯೇ ಮರವರ ಜಾತಿಯ ಜನರೆಲ್ಲ ಒಟ್ಟುಕೂಡಿದರು. ಅವಳ ತಲೆಕೂದಲನ್ನು ಹಣೆದು ಅದರಲ್ಲಿ ಹಂದಿಯ ದಾಡೆಯನ್ನು ಸಿಕ್ಕಿಸಿ ಸಿಂಗರಿಸಿದರು. ಕುತ್ತಿಗೆಯಲ್ಲಿದ್ದ ಮಂಗಲಸೂತ್ರದಲ್ಲಿ ಹುಲಿ ಉಗುರನ್ನು ಕಟ್ಟಿದರು. ಕುಲದೇವಿ ಧರಿಸುವಂತೆ ಶಾಲಿನಿಗೆ ಹುಲಿಯ ಚರ್ಮವನ್ನು ಉಡಿಸಿದರು. ಅವಳ ಕೈಯಲ್ಲಿ ಬಿಲ್ಲುಬಾಣ ಕೊಟ್ಟು ಅವಳನ್ನು ದೊಡ್ಡ ಟಗರೊಂದರ ಮೇಲೆ ಕುಳ್ಳಿರಿಸಿದರು. ಆ ಮೇಲೆ ಕೋಳಿಗಳನ್ನು ಬಲಿಕೊಟ್ಟರು. ದೇವಿಯ ಪೂಜೆಯನ್ನು ಪೂರ್ಣಗೊಳಿಸಿದರು. ಇದನ್ನೆಲ್ಲ ಉದಾಸೀನ ಭಾವದಿಂದ ಕನಕಿ–ಕೋವಲರು ನೋಡುತ್ತ ಆ ರಾತ್ರಿಯನ್ನು ಕಳೆದರು.

ಮರುದಿನ ಬೆಳಗ್ಗೆ ಆ ಮೂವರು ಆ ರೈತರ ಹಳ್ಳಿಯಿಂದ ಹೊರಟು ಮಧ್ಯಾಹ್ನದ ಹೊತ್ತಿಗೆ ಒಂದು ಬ್ರಾಹ್ಮಣರ ಅಗ್ರಹಾರಕ್ಕೆ ತಲಪಿದರು. ಅಲ್ಲಿ ಒಂದು ಛತ್ರದಲ್ಲಿ ಅವರು ಉಳಕೊಂಡರು. ಅವರು ಅಲ್ಲಿರುವಾಗ ಮಾಧವಿ ಕಳುಹಿಸಿಕೊಟ್ಟ ಪತ್ರವೊಂದನ್ನು ಕೋವಲನ ಕೈಗೆ ಇತ್ತನು. ಆ ಪತ್ರದಲ್ಲಿ ಅವಳು ಕ್ಷಮೆ ಕೇಳಿದ್ದಳು. ಏನಾದರೂ ಸರಿಯೇ, ಕನಕಿಯೊಂದಿಗೆ ಪುಹಾರಿಗೆ ಹಿಂದಿರುಗಬೇಕೆಂದು ಬರೆದಿದ್ದಳು. ಕೋವಲನು ಆ ಬ್ರಾಹ್ಮಣನೊಡನೆ "ಪೂಜ್ಯರೇ, ನಾನು ನನ್ನ ಪೂರ್ವಕರ್ಮದ ಫಲವನ್ನು

ಅನುಭವಿಸುತ್ತೇನೆ. ನನಗೆ ಮಾಧವಿಯ ಮೇಲೆ ಎಳ್ಳಷ್ಟೂ ದ್ವೇಷವಿಲ್ಲ. ಆದರೆ ನಾನು ಇನ್ನು ಊರಿಗೆ ಹಿಂದಿರುಗಲಾರೆ" ಎಂದು ಅವನನ್ನು ಕಳುಹಿಸಿಕೊಟ್ಟನು.

ಆ ದಿನ ಅವರು ರಾತ್ರಿಕಾಲದಲ್ಲೇ ದಾರಿ ನಡೆದರು. ಉಷಃಕಾಲದ ವೇಳೆಗೆ ಮಧುರಾನಗರಿಯ ಹೊರವಲಯವನ್ನು ಮುಟ್ಟಿದರು. ಪ್ರಾತಃಕಾಲದ ಮಂಗಲವಾದ್ಯವೂ, ಬ್ರಾಹ್ಮಣರ ವೇದಧ್ವನಿಯೂ, ಅವರ ಮಾರ್ಗಾಯಾಸವನ್ನು ಪರಿಹರಿಸಿತು. ಅವರು ಮುಂದುವರಿದು ಮಧುರಾನಗರದ ಗೊಲ್ಲರಕೇರಿಯನ್ನು ಹೊಕ್ಕರು. ಆಗಲೇ ಮಾಧವಿ ಎಂಬ ಮುದಿ ಗೊಲ್ಲತಿ ಪ್ರಾತಃಕಾಲದ ಪೂಜೆ ತೀರಿಸಿ ಬರುತ್ತಿದ್ದಳು. ಅವಳು ತಮ್ಮ ಕೇರಿಗೆ ಬಂದ ಆ ಮೂವರು ಅತಿಥಿಗಳನ್ನು ಪ್ರೀತಿಯಿಂದ ಮಾತನಾಡಿಸಿದಳು. ಜೈನ ಭಿಕ್ಷುಣಿ ಕವುಂಡಿ ಕನ್ನಕಿಯನ್ನು ಮಾಧವಿಗೆ ಪರಿಚಯ ಮಾಡಿಕೊಡುತ್ತ "ಈಕೆ ಪಾತಿವ್ರತ್ಯವೆಂಬ ಪುಣ್ಯಾಭರಣವನ್ನು ಧರಿಸಿದ ದೇವಿ. ಇವಳಂತಹ ಪತಿವ್ರತೆಯರನ್ನು ನಾನು ಕಂಡಿಲ್ಲ; ಕೇಳಿಲ್ಲ. ಇವಳಿದ್ದಲ್ಲಿ ಬರಗಾಲ ಬಾರದು. ಸಂಪತ್ತು ಸಮೃದ್ಧಿಯಾದೀತು" ಎಂದು ಹೊಗಳಿದಳು. ಮತ್ತು ಕನಕಿ ಕೋವಲರನ್ನು ಮಾಧವಿಯ ಮನೆಯಲ್ಲಿ ಇರಹೇಳಿ ತಾನು ತನ್ನ ಇಷ್ಟದಂತೆ ನಗರದ ಜೈನಮಂದಿರಕ್ಕೆ ನಡೆದಳು. ಮಾಧವಿ ಕನಕಿ ಕೋವಲರನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಅವರು ಆ ದಿನ ಅಲ್ಲೇ ಉಳಕೊಂಡರು.

ಮರುದಿನ ಕೋವಲನು ಕನಕಿಯ ಒಂದು ಕಾಲಬಳೆಯನ್ನು ತೆಗೆದುಕೊಂಡು, ಮಾರಾಟಮಾಡಲೆಂದು ಅಂಗಡಿಬೀದಿಗೆ ಹೋದನು. ಅಲ್ಲಿ ಅವರಿಗೆ ಅರಮನೆಯ ಅಕ್ಕಸಾಲಿ ಎದುರು ಸಿಕ್ಕಿದನು. ಕೋವಲನು ತನ್ನ ಬಳಿಯಲ್ಲಿದ್ದ ಕಾಲುಬಳೆಯನ್ನು ಅರಮನೆಯ ಅಕ್ಕಸಾಲೆಗೆ ತೋರಿಸಿ, ಇದನ್ನು ಮಾರಾಟಮಾಡಿಸಿಕೊಡೆಂದು ಕೇಳಿಕೊಂಡನು.

ಅರಮನೆಯಲ್ಲಿ ರಾಣಿಯ ಕಾಲುಬಳೆಯನ್ನು ಇದೇ ಅಕ್ಕಸಾಲಿ ಕಳವು ಮಾಡಿದ್ದನು. ಆ ಕಳ್ಳತನದಿಂದ ತಪ್ಪಿಸಿಕೊಳ್ಳಲಿಕ್ಕಾಗಿ, ಕಳ್ಳರನ್ನು ತಾನೇ ಹಿಡಿದುತರುತ್ತೇನೆಂದು ರಾಜನೊಡನೆ ಹೇಳಿ ರಾಜದೂತರೊಡನೆ ಹೊರಟದ್ದಾಗಲೇ ಅವನಿಗೆ ಕೋವಲನು ಸಿಕ್ಕಿ ಕಾಲುಬಳೆಯನ್ನು ತೋರಿಸಿದನು. ಆ ಬಳೆ ರಾಣಿಯ ಕಾಲಬಳೆಯಂತೆಯೇ ಇತ್ತು. ಅಕ್ಕಸಾಲಿಯ ಮನಸ್ಸಿ

ನಲ್ಲೀಗ ದುಷ್ಟ ಯೋಚನೆಯೊಂದು ಹೊಳೆಯಿತು. ಈ ಬಳೆಯನ್ನು ರಾಜನಿಗೆ ತೋರಿಸಿ ಕಳವು ತುಬ್ಬಾಯಿತೆಂದು ಹೇಳಿ, ರಾಜನಿಂದ ಹೊಗಳಿಸಿಕೊಳ್ಳುವದೆಂದು ಚಿಂತಿಸಿ, ಅವನು ಬಳಿಯಲ್ಲಿದ್ದ ರಾಜದೂತರೊಡನೆ ಬಳೆಯ ಕಳ್ಳ ಸಿಕ್ಕಿದ, ಇವನನ್ನು ಸೆರೆಹಿಡಿಯಿರಿ ಎಂದು ಹೇಳಿ ಕೋವಲನನ್ನು ಸೆರೆಹಿಡಿಸಿದನು; ಮತ್ತು ಕಾಲಬಳೆಯೊಡನೆ ತಾನು ಅರಮನೆಗೆ ನಡೆದನು.

ಅರಮನೆಯಲ್ಲಿ ಮಹಾರಾಜ ನೆಡುಂಚೆಳಿಯನ್ ಪಾಂಡ್ಯನು ತನ್ನ ಹೆಂಡತಿಯನ್ನು ಸಮಾಧಾನಪಡಿಸುತ್ತಿದ್ದನು. ಮಹಾರಾಣಿ ತನ್ನ ಕಾಲುಬಳೆ ಕಳವಾದುದಕ್ಕೆ ಕಳವಳಗೊಂಡಿದ್ದಳು. ಮಹಾರಾಜನು ಸಿಟ್ಟುಗೆದ್ದಿದ್ದನು. ಇದೇ ವೇಳೆಯಲ್ಲಿ ಅಕ್ಕಸಾಲಿ ಬಂದು ಕಳ್ಳ ಸಿಕ್ಕಿದ ಎಂದು ವರದಿಮಾಡಿದನು. “ಕಳ್ಳನು ಸಿಕ್ಕಿದನೋ? ರಾಣಿಯ ಕಾಲಬಳೆ ಕದ್ದ ಆ ಕಳ್ಳನನ್ನು ತಲೆ ಹಾರಿಸಿಬಿಡಿ” ಎಂದು, ಕೋಪಗೊಂಡ ರಾಜನು ರಾಜಧರ್ಮವನ್ನು ಮೀರಿ ಹಿಂದು ಮುಂದೆ ವಿಚಾರಿಸದೆ ಅಪ್ಪಣೆಕೊಟ್ಟನು.

ಅಕ್ಕಸಾಲಿ ಆ ಅಪ್ಪಣೆಯನ್ನು ನಗರ ಪಾಲಕರಿಗೆ ತಿಳಿಸಿದನು. ನಗರ ಪಾಲಕರಲ್ಲಿ ಕೆಲವರು ಕೋವಲನ ನಿಷ್ಕಲಂಕ ಮುಖಮುದ್ರೆಯನ್ನು ನೋಡಿ ರಾಜನ ಅಪ್ಪಣೆಯನ್ನು ಪಾಲಿಸಲು ಹಿಂದೆ ಮುಂದೆ ನೋಡಿದರು. ಆದರೆ ಅಕ್ಕಸಾಲೆಯ ಅವಸರಕ್ಕೆ ಇನ್ನು ಕೆಲವರು ಕಿವಿಗೊಟ್ಟರು. ಆ ನಗರ ರಕ್ಷಕರಲ್ಲಿ ಮೂರ್ಖನಾದವನು ಒಬ್ಬನಿದ್ದನು. ಅವನು ತನ್ನ ಖಡ್ಗವನ್ನೆತ್ತಿ ಕೋವಲನ ತಲೆಯನ್ನು ಹಾರಿಸಿಯೇ ಬಿಟ್ಟನು. ಇಷ್ಟಾಗುವಾಗ ಸಂಜೆಯಾಯಿತು.

ಆ ದಿನ ರಾತ್ರಿ ಕನಕಿ ಬಿಡಾರಮಾಡಿದ್ದ ಗೊಲ್ಲರಕೇರಿಯಲ್ಲಿ ಹಲವು ಬಗೆಯ ಅಪಶಕುನಗಳು ಕಂಡುಬಂದುವು. ಆಗ ಗೊಲ್ಲತಿಯರೆಲ್ಲ ಒಟ್ಟು ಸೇರಿ ಕುರವೈಕ್ಕೂತ್ತು (ಸಾಮೂಹಿಕ ನೃತ್ಯ) ಮಾಡಿ ತಮ್ಮ ಕುಲದೇವರಾದ ಕೃಷ್ಣನನ್ನು ಆರಾಧಿಸಿದರು.

ಮರುದಿನ ಬೆಳಗ್ಗೆ ನದಿಗೆ ಸ್ನಾನಕ್ಕೆ ಹೋದ ಮಾಧವಿಗೆ ಕೋವಲನ ವಧೆಯ ವೃತ್ತಾಂತ ಕಿವಿಗೆಬಿತ್ತು. ಅದನ್ನು ಕೇಳಿದೊಡನೆಯೇ ಆಕೆಗೆ ಕಣ್ಣುಕತ್ತಲೆ ಬಂದಾಂತಾಯಿತು. ಅವಳು ನದೀ ತೀರದಿಂದ ಅಳುತ್ತಾ

ಓಡಿಯೋಡಿ ಮನೆಗೆ ಬಂದು ಕನಕಿಗೆ ತಿಳಿಸಿದಳು. ಈ ವಜ್ರಾಘಾತದಿಂದ ಕನಕಿ ಮೂರ್ಛೆಗೊಂಡಳು. ಮಾಧವಿಯು ಶೈತ್ಯೋಪಚಾರದಿಂದ ಮೂರ್ಛೆ ತಿಳಿದೆದ್ದ ಕನಕಿಯ ಕಣ್ಣುಗಳು ಕೆಂಪೇರಿದ್ದುವು. ಅವಳು ಉದಿಸಿ ಬರುತ್ತಿರುವ ಸೂರ್ಯನ ಕಡೆಗೆ ದೃಷ್ಟಿ ಬೀರಿ, "ಹೇ ಲೋಕಚಕ್ಷು, ಕರ್ಮಸಾಕ್ಷಿ, ನನ್ನ ಪತಿದೇವನು ನಿಜವಾದ ಕಳ್ಳನೋ? ನೀನೇ ಹೇಳು" ಎಂದು ಮೊರೆಯಿಟ್ಟಳು.

ಪತಿವ್ರತೆಯಾದ ಕನಕಿಯ ಪ್ರಶ್ನೆಗೆ ಉತ್ತರವೋ ಎಂಬಂತೆ "ದೇವಿ, ನಿನ್ನ ಪತಿ ಕಳ್ಳನಲ್ಲ. ಕಳ್ಳತನದ ಆರೋಪದಿಂದ ಅವನ ವಧೆಯಾಯಿತು. ಇದರಿಂದಾಗಿ ನಿನ್ನ ಕೋಪದಿಂದಾಗಿ ಈ ಮಧುರಾನಗರಿ ಸುಟ್ಟು ಬೂದಿಯಾಗುವುದು" ಎಂದು ಒಂದು ಅಶರೀರವಾಣಿ ಕೇಳಿಸಿತು.

ಕನಕಿ ತನ್ನಲ್ಲಿ ಉಳಿದಿದ್ದ ಒಂದು ಕಾಲುಬಳೆಯನ್ನು ತೆಗೆದುಕೊಂಡು "ನಾನು ನಿಜವಾದ ಪತಿವ್ರತೆಯಾದರೆ ಒಂದು ಕ್ಷಣಕ್ಕಾದರೂ ನನಗೆ ಪತಿದೇವನ ದರ್ಶನವಾಗದಿರದು" ಎಂದು ಚಿಂತಿಸುತ್ತ ಕೋವಲನ ವಧೆಯಾಗಿದ್ದಲ್ಲಿಗೆ ಬಂದಳು. ಅಲ್ಲಿ ನೆತ್ತರ ಹೊಳೆಯಲ್ಲಿ ಮುಳುಗೇಳುತ್ತಿದ್ದ ಪತಿದೇವನನ್ನು ಕಂಡಳು. ಶರೀರದಿಂದ ಬೇರೆಯಾಗಿದ್ದ ರುಂಡವನ್ನು ಶರೀರಕ್ಕೆ ಸೇರಿಸಿ, ಗೋಳಿಟ್ಟು ಕಣ್ಣೀರು ಸುರಿಸಿದಳು. ಕನಕಿಯ ಪತಿವ್ರತಾ ಧರ್ಮದ ಪ್ರಭಾವದಿಂದಲೆಂಬಂತೆ "ಪ್ರಿಯೆ", ಎಂದು ಕೋವಲನು ಕಣ್ಣು ತೆರೆದು ಒಂದು ಕ್ಷಣ ಕನಕಿಯನ್ನು ನೋಡಿ ಕಣ್ಣು ಮುಚ್ಚಿದನು! ಅವನ ಪ್ರಾಣಜ್ಯೋತಿ ದೇಹವನ್ನು ಬಿಟ್ಟು ಆಕಾಶದ ಕಡೆಗೆ ನೆಗೆಯಿತು. ಈ ಅದ್ಭುತವನ್ನು ನೋಡುತ್ತ ಕನಕಿ ಅರಮನೆಯ ಕಡೆಗೆ ನಡೆದಳು.

ಅರಮನೆಯಲ್ಲಿ ರಾಣಿ ತಾನು ಕಂಡ ದುಸ್ವಪ್ನವನ್ನು ರಾಜನಿಗೆ ವಿವರಿಸಿ ಹೇಳುತ್ತಿದ್ದಳು. ಆಗ ಶೋಕ ಕೋಪಗಳ ಸಜೀವಮೂರ್ತಿಯಂತೆ ಕನಕಿ ಅವರೆದುರಿಗೆ ಹೋಗಿ ನಿಂತಳು. ತನ್ನ ಪತಿಯ ದುರ್ಮರಣದ ವೃತ್ತಾಂತವನ್ನು ತಿಳಿಸಿ, ಅನ್ಯಾಯವಾಯಿತೆಂದು ಹೇಳಿದಳು. ತನ್ನ ನ್ಯಾಯದ ಮೇಲೆ ನಂಬಿಕೆಯಿದ್ದ ಪಾಂಡ್ಯರಾಜನು "ನಿನ್ನ ಪತಿ ನಿಜವಾಗಿ ಕಳ್ಳನಾದುದರಿಂದಲೇ ಆ ಶಿಕ್ಷೆಯನ್ನು ಹೊಂದಿದನು". ಎಂದು ನುಡಿದನು.

"ತನ್ನ ಪತಿ ಎಂದಿಗೂ ಕಳ್ಳನಲ್ಲ. ಅದನ್ನು ರುಜುಗೊಳಿಸಲೆಂದೇ

ಸಾಸಿಲ್ಲಿಗೆ ಬಂದಿರುವೆ. ಇಲ್ಲಿ ನೋಡು, ನನ್ನ ಪತಿಯು ಕೈಯಲ್ಲಿದ್ದ ಕಾಲು ಬಳೆ ನನ್ನದು. ಇನ್ನೊಂದು ಬಳೆ ನನ್ನೊಡನಿದೆ. ಆದರೊಳಗೆ ಮಾಣಿಕ್ಯ ಗಳಿವೆ" ಎಂದು ಕಾಲುಬಳೆಯನ್ನು ತೋರಿಸಿದಳು.

"ಮಹಾರಾಣಿಯ ಕಾಲುಬಳೆಯಲ್ಲಿ ಮುತ್ತುಗಳಿವೆ" ಎಂದು ರಾಜನು ಕೋವಲನ ಕೈಯಿಂದ ಕಿತ್ತುಕೊಂಡಿದ್ದ ಕಾಲುಬಳೆಯನ್ನು ತರಿಸಿ ಕನಕಿಯ ಮುಂದಿರಿಸಿದನು. ಕನಕಿ ಆ ಬಳೆಯನ್ನು ತೆಗೆದು ಸಿಟ್ಟಿನಿಂದ ನೆಲಕ್ಕೊಗೆದಳು. ಕಾಲುಬಲೆ ಒಡೆದು ಚೂರುಚೂರಾಯಿತು. ಆದರೊಳಗಿದ್ದ ಮಾಣಿಕ್ಯಗಳು ನಾಲ್ಕೆಡೆಗೂ ಚೆಲ್ಲಿ ಬಿದ್ದುವು. ಸತ್ಯ ಸಂಗತಿ ಹೊರಬಿತ್ತು.

ಸತ್ಯಕ್ಕೆ ಚ್ಯುತಿಬಂದುದನ್ನು ಕಂಡು ರಾಜನ ತಲೆ ತಿರುಗಿತು, ಅವನ ಕೈಯಲ್ಲಿದ್ದ ರಾಜದಂಡ ಕೆಳಗುರುಳಿತು. ಸಿಂಹಾಸನದಲ್ಲಿದ್ದ ಶ್ವೇತಚ್ಛತ್ರ ಮುರಿದುಬಿತ್ತು; ರಾಜನು ಮೂರ್ಛೆಹೋಗಿ ನೆಲಕ್ಕುರುಳಿದನು. ಆತನ ಪ್ರಾಣಪಕ್ಷಿ ಹಾರಿಹೋಯಿತು. ಬಳಿಯಲ್ಲಿದ್ದ ರಾಣಿ ಸಹಿಸಲಾರದ ದುಃಖವನ್ನು ತಡೆದುಕೊಂಡು ತನ್ನ ಪತಿಯ ಅಪರಾಧವನ್ನು ಕ್ಷಮಿಸೆಂದು ಬೇಡಿಕೊಂಡಳು, ಆ ಮೇಲೆ ಪತಿಯೊಂದಿಗೆ ಸತಿಯಾದಳು.

ಇದರಿಂದ ಕನಕಿಗೆ ಕೋಪ ಮಾತ್ರ ಆಗಿರಲಿಲ್ಲ. "ಈ ರಾಜನೊಂದಿಗೆ ಈ ನಗರವೂ ನಾಶವಾಗಬೇಕು"ಎನ್ನುತ ತನ್ನ ಆ ಎಡಲೊಲೆಯನ್ನು ಕಿತ್ತು "ನನ್ನ ಪತಿಯನ್ನು ನಾಶಮಾಡಿದ ಈ ನಗರವು ಭಸ್ಮವಾಗಲಿ" ಎಂದು ಶಪಿಸಿದಳು.

ಶಾಪದ ಫಲವಾಗಿ ಆಗಲೇ ನಗರದಲ್ಲಿ ಬೆಂಕಿ ಎದ್ದಿತು. ಅಗ್ನಿದೇವನು ಬ್ರಾಹ್ಮಣ ವೇಷಧಾರಿಯಾಗಿ ಕನಕಿಯ ಮುಂದೆ ನಿಂತು "ದೇವಿ, ಯಾರನ್ನು ಸುಡಬೇಕು, ಯಾರನ್ನು ಬಿಡಬೇಕು" ಎಂದು ಕೇಳಿಕೊಂಡನು. ಅದಕ್ಕೆ ಕನಕಿ "ವೈದಜ್ಞರಾದ ಬ್ರಾಹ್ಮಣರನ್ನೂ, ಪತಿವ್ರತೆಯರನ್ನು, ಧರ್ಮ ಮಾರ್ಗದಲ್ಲಿ ನಡೆದವರನ್ನು, ಮುದುಕರನ್ನು, ಮಕ್ಕಳನ್ನು, ಪಶುಪಕ್ಷಿಗಳನ್ನು ಬಿಟ್ಟು ಉಳಿದುವನ್ನೆಲ್ಲಾ ಸುಟ್ಟುಬಿಡು" ಎಂದು ಹೇಳಿದಳು. ಬ್ರಾಹ್ಮಣನು ಮಾಯವಾದನು. ನಗರವನ್ನು ನಾಲ್ಕು ದಿಕ್ಕುಗಳಿಂದ ರಕ್ಷಿಸುತ್ತಿದ್ದ ನಾಲ್ವರು ನಗರರಕ್ಷಾ ದೇವಿಯರು ನಗರವನ್ನು ಬಿಟ್ಟು ದೂರ ಸರಿದರು, ನಗರವು ನಾಲ್ಕು ಕಡೆಗಳಿಂದಲೂ ಉರಿದು ಭಸ್ಮವಾಯಿತು.

ಮಧುರಾನಗರ ಸುಟ್ಟು ಉರಿದು, ಉರಿ ಆರುವಾಗ ನಗರದ ಮುಖ್ಯ ರಕ್ಷಾದೇವಿ ಕನಕಿಗೆ ಪ್ರತ್ಯಕ್ಷಳಾಗಿ, "ದೇವಿ, ನೆಡುಂಜೆಲಿಯನ್ ಪಾಂಡ್ಯ ನಲ್ಲಿ ಯಾವ ತಪ್ಪೂ ಇಲ್ಲ, ಆ ನಿನ್ನ ಪತಿ ಅವನ ಕರ್ಮದ ಫಲವಾಗಿ ದುರ್ಮರಣವನ್ನು ಹೊಂದಿದನು. ಅವನು ಪೂರ್ವ ಜನ್ಮದಲ್ಲಿ ಕಪಿಲಪುರ ವೆಂಬ ಪಟ್ಟಣದ ನಗರ ಪಾಲಕನಾಗಿದ್ದನು. ಆಗ ಅವನು ನಿರಪರಾಧಿ ಯಾದ ವ್ಯಾಪಾರಿಯೊಬ್ಬನನ್ನು ಶತ್ರುಗಳ ಗುಪ್ತಚರನೆಂದು ಸಂಶಯಪಟ್ಟು, ರಾಜಾಜ್ಞೆ ಪಡೆದು ಕೊಲ್ಲಿಸಿಬಿಟ್ಟನು. ಆ ವ್ಯಾಪಾರಿಯ ಹೆಂಡತಿ ಪತಿ ಮರ ಣದ ದುಃಖದಿಂದ ಪೀಡಿತಳಾಗಿ ಹದಿನಾಲ್ಕು ದಿನಗಳ ವರೆಗೆ ಜೀವಿಸಿ ಕೊಂಡಿದ್ದು "ನನ್ನ ಪತಿಯ ಮರಣಕ್ಕೆ ಕಾರಣನಾದವನು, ಇನ್ನೊಂದು ಜನ್ಮ ದಲ್ಲಿ ದುರ್ಮರಣ ಹೊಂದಲಿ" ಎಂದು ಶಪಿಸಿದಳು. ನೀನು ಕೂಡ ಆಕೆ ಯಂತೆ ಹದಿನಾಲ್ಕು ದಿನಗಳ ವರೆಗೆ ಆ ದುಃಖವನ್ನು ಅನುಭವಿಸಿ, ಪತಿ ಸಾನ್ನಿಧ್ಯವನ್ನು ಸೇರುವೆ, ಸ್ವರ್ಗಸುಖವನ್ನು ಅನುಭವಿಸುವೆ" ಎಂದು ಹೇಳಿ ಮಾಯವಾದಳು.

ಪತಿಶೋಕದಿಂದ ಪೀಡಿತಳಾದ ಕನಕಿ ಪಾಂಡ್ಯದೇಶದಿಂದ ಹೊರಟು ಹದಿನಾಲ್ಕನೆಯ ದಿನ ಚೋರನಾಡಿನ ಚೀಂಗದ ಬೆಟ್ಟಕ್ಕೆ ಬಂದಳು. ಅವಳು ಆ ಬೆಟ್ಟದ ಮೇಲೆ ದುಃಖಾಂಧಳಾಗಿ ನಿಂತಿದ್ದಾಗ ದೇವಲೋಕದಿಂದ ಒಂದು ವಿಮಾನ ಕೆಳಗಿಳಿಯಿತು. ಆ ವಿಮಾನದಲ್ಲಿ ದೇವದೂತರೂ ಕೋವಲನೂ ಕುಳಿತಿದ್ದರು. ಕೋವಲನು ವಿಮಾನದಿಂದ ಇಳಿದು ಕನ್ನಕಿಯನ್ನೆತ್ತಿ ಕೊಂಡು ವಿಮಾನದಲ್ಲಿ ಕುಳ್ಳಿರಿಸಿದನು. ವಿಮಾನ ಆಕಾಶಮಾರ್ಗವಾಗಿ ಸ್ವರ್ಗಕ್ಕೇರಿತು. ಪತಿವ್ರತೆಯಾದ ಕನ್ನಕಿ ಪತಿಯೊಂದಿಗೆ ಸ್ವರ್ಗಾರೋಹಣ ಮಾಡಿದಳು.

ಚೇರನಾಡಿನ ಆ ಚೀಂಗದ ಬೆಟ್ಟದಲ್ಲಿ ಕುರವರೆಂಬ ಕಾಡು ಜನರು ವಾಸ ವಾಗಿದ್ದರು. ಅವರು, ಕನ್ನಕಿ ವಿಮಾನವೇರಿ ಸ್ವರ್ಗಕ್ಕೆ ಹೋದುದನ್ನು ನೋಡಿ ಆಶ್ಚರ್ಯಗೊಂಡರು. ಭಯಭಕ್ತಿಯಿಂದ ನಮಸ್ಕಾರ ಮಾಡಿದರು. ಆಗಲೇ ಕನ್ನಕಿಯನ್ನು ತಮ್ಮ ಕುಲದೇವಿಯನ್ನಾಗಿ ಸ್ವೀಕರಿಸಿ, ಆಗಲೇ ಸಾಮೂಹಿಕ ನೃತ್ಯವನ್ನು ಆಚರಿಸಿದರು.

ಚೀಂಗ ಬೆಟ್ಟದ ಆ ಕೊರವರು ವಾಂಜೀ ನಗರಿಗೆ ನಡೆದು ಚೇರರಾಜ ನಾದ ಹೆಂಗುಟ್ಟುವನೆ ರಾಜನಿಗೆ ಕನ್ನಕಿಯ ವೃತ್ತಾಂತವನ್ನು ತಿಳಿಸಿದರು.

ಆಗ ರಾಜಸಭೆಯಲ್ಲಿ ಮಧುರೆಯ ರಾಜಕವಿ ಚೀತ್ತಲೈಶಾತ್ತನಾರ್ ಎಂಬವರಿದ್ದರು. ಅವರೂ ಕೋವಲ ಕನ್ನಕಿಯರ ವೃತ್ತಾಂತವನ್ನೂ ಮಧುರೆ ಉರಿದು ಹೋದುದನ್ನೂ ತಿಳಿಸಿದರು. ಈ ವಿಷಯವನ್ನೆಲ್ಲಾ ಬಳಿಯಲ್ಲಿ ಕುಳಿತು ಕೇಳುತ್ತಿದ್ದ ರಾಣಿ, ನಾವು ಒಂದು ಸುಂದರವಾದ ಮಂದಿರವನ್ನು ನಿರ್ಮಾಣಗೈಸಿ, ಆ ಪತಿವ್ರತಾ ದೇವಿಯ ಮೂರ್ತಿಯನ್ನು ಅಲ್ಲಿ ಪ್ರತಿಷ್ಠೆ ಮಾಡಿಸಬೇಕೆಂದು ರಾಜನಿಗೆ ಸೂಚಿಸಿದಳು. ರಾಜನೂ ಹೆಂಡತಿಯ ಸೂಚನೆಗೆ ಒಪ್ಪಿಕೊಂಡನು.

ಮರುದಿನ ರಾಜನು ಸಭೆಸೇರಿ ಮಂತ್ರಿಪರಿಜನರೊಡನೆ ಕನ್ನಕಿಗೆ ಮಂದಿರ ಕಟ್ಟಿಸುವ ವಿಷಯವನ್ನು ಪ್ರಸ್ತಾಪಿಸಿದನು. ಕನ್ನಕಿಯ ಮೂರ್ತಿ ಕೆತ್ತಲು, ಕಲ್ಲನ್ನು ಎಲ್ಲಿಂದ ತರಬೇಕೆಂದು ವಿಚಾರಿಸಿದನು. ಆಗ ಮಂತ್ರಿಯು ಎದ್ದುನಿಂತು "ಉತ್ತರದ ಹಿಮಾಲಯದಿಂದ ಪವಿತ್ರ ಶಿಲೆಯನ್ನು ತರುವುದೇ ಮೇಲು, ಇದೇ ಸಂದರ್ಭದಲ್ಲಿ ಉತ್ತರದ ದಿಗ್ವಿಜಯ ಮಾಡಿದಂತೆಯೂ ಆಗುವುದು" ಎಂದು ಸೂಚಿಸಿದನು.

ಮಂತ್ರಿಯ ಸೂಚನೆಯನ್ನು ಅನುಮೋದಿಸುತ್ತ ರಾಜನು "ಮಂತ್ರಿ, ನಿನ್ನ ಸೂಚನೆ ಸರಿಯಾದುದು. ಉತ್ತರದ ಕೆಲವು ರಾಜರು ದಕ್ಷಿಣದ ತಮಿಳರನ್ನು ಹಳಿಯುತ್ತಿರುವರೆಂದು, ತೀರ್ಥಯಾತ್ರೆಯಿಂದ ಹಿಂದಿರುಗಿ ಬಂದ ಸಾಧುಗಳಿಂದ ನಾನು ಕೇಳಿರುವೆ. ಅವರಲ್ಲಿ ಕನಕ ಮತ್ತು ವಿಜಯ ಎಂಬವರು ಮುಖ್ಯರಂತೆ. ಅವರನ್ನು ಸೋಲಿಸಿ, ಪವಿತ್ರಶಿಲೆಯನ್ನು ಅವರಿಂದಲೇ ಹೊರಿಸಿತರುತ್ತೇನೆ. ಈಗಲೇ ಉತ್ತರ ದಿಗ್ವಿಜಯಕ್ಕೆ ಹೊರಡಲು ನಮ್ಮ ಸೇನೆ ಸಿದ್ಧವಾಗಲಿ" ಎಂದು ನುಡಿದನು. ಸಭಿಕರೆಲ್ಲರೂ ಜಯ ಜಯವೆಂದು ರಾಜನ ಅಪ್ಪಣೆಯನ್ನು ಅನುಮೋದಿಸಿದರು.

ಸುಮುಹೂರ್ತದಲ್ಲಿ ಚೇರರಾಜನು ಉತ್ತರ ದಿಗ್ವಿಜಯಕ್ಕೆ ಹೊರಟನು. ದಾರಿಯಲ್ಲಿ ಹಲವಾರು ಸಾಮಂತರಾಜರು ಕಪ್ಪಕಾಣಿಕೆಗಳನ್ನಿತ್ತರು. ಮಿತ್ರರಾಜರು ತಂತಮ್ಮ ಅರಮನೆಗೆ ಸ್ವಾಗತಿಸಿ ಸನ್ಮಾನಿಸಿದರು. ಚೇರರಾಜನು ನೀಲಗಿರಿಗೆ ಬಂದಾಗ ಅಲ್ಲಿನ ಕನ್ನಡಿಗರು ಸಂಭ್ರಮದ ಸ್ವಾಗತವಿತ್ತರು. ರಾಜನು ನೀಲಗಿರಿಯ ಕನ್ನಡಿಗರ ನೃತ್ಯವನ್ನು ನೋಡಿ ಸಂತಸಗೊಂಡನು. ಮುಂದೆ ಕೊಂಕಣ ಮಹಾರಾಷ್ಟ್ರಗಳ ರಾಜರು ಇವನನ್ನು ಆದರಿಸಿದರು.

ಚೇರರಾಜನು ಇನ್ನೂ ಉತ್ತರಕ್ಕೆ ಮುಂದುವರಿದು ಆರ್ಯ ರಾಜರಾದ ಕನಕ ವಿಜಯರೊಡನೆ ಹೋರಾಡಿದನು. ಈ ಹೋರಾಟ ದಲ್ಲಿ ಕನಕ ವಿಜಯರ ಸಹಾಯಕ್ಕೆ ಹಲವು ಮಂದಿ ಆರ್ಯರಾಜರು ಬಂದಿದ್ದರು. ತಮಿಳುನಾಡಿನ ಮರವಜಾತಿಯ ಸೈನಿಕರು ವೀರಾವೇಶದಿಂದ ಹೋರಾಡಿದರು. ಉತ್ತರದ ಆರ್ಯರು ಯುದ್ಧದಲ್ಲಿ ಸೋತರು. ಹಲವರು ವೇಷಬದಲಿಸಿ ರಣಭೂಮಿಯಿಂದ ಪಲಾಯನ ಮಾಡಿದರು. ಯುದ್ಧ ವಿಜಯಿಯಾದ ಚೇರರಾಜನು ಹಿಮಾಲಯದ ಮೇಲೆ ತನ್ನ ಧ್ವಜವನ್ನೇರಿಸಿ ದನು. ಪವಿತ್ರಶಿಲೆಯನ್ನು ಕನಕ ವಿಜಯರ ತಲೆಯ ಮೇಲೆ ಹೊರಿಸು ವಂತೆ ಮಂತ್ರಿ ಆಜ್ಞಾಪಿಸಿದನು.

ಉತ್ತರ ದಿಗ್ವಿಜಯದಿಂದ ಹಿಂದಿರುಗಿ ಬರುವಾಗ ಚೇರನರೇಶನು ಗಂಗಾನದಿಯಲ್ಲಿ ಆ ಪವಿತ್ರ ಶಿಲೆಯನ್ನು ವಿಹಾಯಿಸಿ ಮುಂದುವರಿದನು. ರಾಜನು ಗಂಗಾನದಿಯನ್ನು ದಾಟಿಬಂದೊಡನೆಯೇ ಆರ್ಯರಾಜದಲ್ಲಿ ಹಲವರು ಅವನನ್ನು ಸಂಭ್ರಮದಿಂದ ಸ್ವಾಗತಿಸಿದರು. ತಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂದು ಹೇಳಿಕೊಂಡರು. ಚೆಂಗುಟ್ಟುವನರಾಜನು ಅವರ ಕೇಳಿಕೆಗೆ ಒಪ್ಪಿಕೊಂಡು, ಅವರ ಆತಿಥ್ಯವನ್ನು ಸ್ವೀಕರಿಸಿದನು.

ರಾಜನು ಮುಂದೆ ದಕ್ಷಿಣಕ್ಕೆ ಬರುತ್ತಿದ್ದಾಗ ಉತ್ತರದ ಕಾಶಿಗೆ ಯಾತ್ರೆ ಹೊರಟಿದ್ದ, ಕೋವಲನ ಮಿತ್ರನಾದ ಮಾದಲನೆಂಬ ಬ್ರಾಹ್ಮಣನು ಸಿಕ್ಕಿದನು. ಅವನು ರಾಜನಿಗೆ ದಕ್ಷಿಣ ದೇಶದ ವರ್ತಮಾನವನ್ನೆಲ್ಲ ತಿಳಿಸಿದನು. "ಮಹಾರಾಜ, ಮಧುರೆ ಸುಟ್ಟು ಸುಣ್ಣವಾದ ಮೇಲೆ ಒಮ್ಮೆ ನಾನು ಅಲ್ಲಿಗೆ ಹೋಗಿದ್ದೆ. ಅಲ್ಲಿ ಕನಕಿ ಕೋವಲರಿಗೆ ಆಶ್ರಯಕೊಟ್ಟಿದ್ದ ಮಾಧವಿಗೊಲ್ಲತಿ ಅವರ ಮರಣ ವೃತ್ತಾಂತವನ್ನು ಕೇಳಿ ಹೃದಯ ಒಡೆದು ಜೀವ ಬಿಟ್ಟಿದ್ದಳು. ಆ ದಂಪತಿಗಳೊಡನೆ ಮದುರೆಗೆ ಬಂದಿದ್ದ ಜೈನ ಭಿಕ್ಷುಕಿ ಶರೀರದ ಅನಿತ್ಯತೆಯನ್ನು ತಿಳಿದು ಯೋಗದಿಂದ ದೇಹ ಬಿಟ್ಟಳು. ಮುಂದೆ ನಾನು ಪುಹಾರಿಗೆ ಹೋದೆ. ಅಲ್ಲಿಯೂ ಕನಕಿ ಕೋವಲರ ತಾಯಂದಿರು ತಮ್ಮ ಮಕ್ಕಳ ಮರಣ ವೃತ್ತಾಂತವನ್ನು ಕೇಳಿ ಎದೆ ಬಿರಿದು ಜೀವಬಿಟ್ಟಿದ್ದರು. ಅವರ ಹಿರಿಯರಾದ ಮಹಾಸತ್ವ ಮಹಾನಾಯಕರು ತಮ್ಮ ಸಂಪತ್ತನ್ನೆಲ್ಲಾ ಬಡವರಿಗೆ ದಾನಮಾಡಿ ಸನ್ಯಾಸಿಗಳಾಗಿ ಎಲ್ಲಿಗೋ ಹೊರಟು ಹೋಗಿದ್ದರು. ರಾಜನರ್ತಕಿ ಕೋವಲನ ಪ್ರಿಯತಮೆ ಮಾಧವಿ

ಈ ಸುದ್ದಿಯನ್ನು ಕೇಳಿ ವ್ಯಥೆಗೊಂಡು ತನ್ನ ಮಗಳು ಮಣಿಮೇಖಲೆ ಯೊಡನೆ ಬೌದ್ಧವಿಹಾರವನ್ನು ಸೇರಿದಳು."

"ಅದೆಲ್ಲಾ ಸರಿ, ಈಗ ಪಾಂಡ್ಯರಾಜ್ಯದ ಸ್ಥಿತಿಯೇನು? ಪಾಂಡ್ಯ ಸಿಂಹಾಸನದಲ್ಲಿ ಯಾರು ವಿರಾಜಿಸುತ್ತಿರುವರು" ಎಂದು ರಾಜನು ಬ್ರಾಹ್ಮಣ ನೊಡನೆ ಕೇಳಿದನು.

"ಮಹಾರಾಜ, ಈಗ ನೆಡುಂಚೆಳಿಯನ ಮಗನು ಸಿಂಹಾಸನದಲ್ಲಿರು ವನು. ತನ್ನ ತಂದೆಯನ್ನು ಅಕ್ಕಸಾಲಿಯೊಬ್ಬನು ಮೋಸಗೊಳಿಸಿದುದನ್ನು ಅವನು ಮನಸ್ಸಿನಲ್ಲಿಟ್ಟುಕೊಂಡು, ಮಧುರಾನಗರಿ ಸುಟ್ಟು ಉರಿಯುತ್ತಿರು ವಾಗ ತಪ್ಪಿಸಿಕೊಂಡು ಹೋದ ಸಾವಿರ ಮಂದಿ ಅಕ್ಕಸಾಲಿಗರ ತಲೆ ಕಡಿಸಿ, ಆ ಮೇಲೆ ಸಿಂಹಾಸನವನ್ನು ಏರಿದನು" ಎಂದು ರಾಜನ ಪ್ರಶ್ನೆಗೆ ಉತ್ತರಿಸಿ, ತಾನು ಉತ್ತರಕ್ಕೆ ನಡೆದನು.

ಚೇರರಾಜನು ಪವಿತ್ರ ಶಿಲೆಯೊಡನೆ ವಾಂಜೀ ನಗರಕ್ಕೆ ಬಂದು ಕನ್ನಕಿಯ ಮೂರ್ತಿಯನ್ನು ಮಾಡಿಸಿ, ಮಂದಿರವನ್ನು ನಿರ್ಮಿಸಿ, ಸುಮುಹೂರ್ತದಲ್ಲಿ ಮೂರ್ತಿ ಪ್ರತಿಷ್ಠೆ ಮಾಡಿಸಿದನು. ಈ ಉತ್ಸವಕ್ಕೆ ಕೊಡಗು, ಕೊಂಕಣ, ಸಿಂಹಳ ಮೊದಲಾದ ನಾಡುಗಳಿಂದ ಜನರು ಬಂದಿದ್ದರು. ರಾಜನು ತಾನು ಉತ್ತರ ದಿಗ್ವಿಜಯದ ಕಾಲದಲ್ಲಿ ಸೆರೆಹಿಡಿದ ವರನ್ನೆಲ್ಲ ಸೆರೆಯಿಂದ ಬಿಡಿಸಿ ಸ್ವತಂತ್ರಗೊಳಿಸಿದನು.

ಉತ್ಸವದ ಕಾಲದಲ್ಲಿ ಕನ್ನಕಿದೇವಿ ದೇವಂತಿ ಎಂಬ ಕನ್ನಿಕೆಯ ಮೈಮೇಲೆ ಬಂದು "ನನ್ನನ್ನು ಪೂಜಿಸುವವರ ಅಭೀಷ್ಟವನ್ನು ಸಲ್ಲಿಸು ವೆನೆ"ಂದು ಅಭಯವಿತ್ತಳು. ಉತ್ಸವಕ್ಕೆ ಬಂದಿದ್ದ ದೇಶ ವಿದೇಶಗಳ ಅರಸರು ತಂತಮ್ಮ ನಾಡುಗಳಿಗೆ ಹೋಗಿ ಕನ್ನಕಿಗೆ ಮಂದಿರ ಕಟ್ಟಿಸಿ ಪೂಜಿಸತೊಡಗಿದರು. ಸತೀ ಕನ್ನಕಿ ದಕ್ಷಿಣ ಭಾರತದ ಮತ್ತು ಸಿಂಹಳದ ಪತಿವ್ರತಾ ದೇವಿಯಾಗಿ ಇಂದಿಗೂ ವಿರಾಜಿಸುವಳು.



# "ಒಂದಾಣೆ ಮಾಲೆ"ಯಲ್ಲಿ
# ಪ್ರಕಟವಾಗುವ ಕೆಲವು ವಿಷಯಗಳು:

| | |
|---|---|
| ಸಣ್ಣ ಕತೆಗಳು | ಪ್ರಹಸನಗಳು |
| ನೀಳ್ಗತೆಗಳು | ಏಕಾಂಕ ನಾಟಕಗಳು |
| ವ್ಯಕ್ತಿಚಿತ್ರ | ದೇಶ-ವಿದೇಶ ಚರಿತ್ರೆ |
| ವಿಜ್ಞಾನ | ಚಿಕ್ಕ ನಿಘಂಟುಗಳು |
| ಶಿಲ್ಪ— | ಜಗತ್ತಿನ ಶ್ರೇಷ್ಠ ತತ್ವಜ್ಞಾನಿಗಳ ಉಪದೇಶ |
| ಲಲಿತಕಲೆ | ಸೃಷ್ಟಿಯ ವೈಚಿತ್ರ್ಯಗಳು |
| ಗೃಹವೈದ್ಯ | ಶೈಕ್ಷಣಿಕ ವಿಚಾರಗಳು |
| ಗೃಹಿಣಿಯರಿಗೆ | ಕ್ಷೇತ್ರಗಳ ವಿವರ |
| ಉಪಯುಕ್ತ ಸಲಹೆಗಳು | |
| ಸುಭಾಷಿತ | ವಾಙ್ಮಯ ವಿಚಾರ |
| ಪ್ರಯಾಣ ಕತೆಗಳು | ಸತ್ಯಕಥಾನಕಗಳು, ಇತ್ಯಾದಿ. |

ಶ್ರೀ| ಕೋ. ಶ. ಕಾರಂತ, ಎಡ್ವೋಕೇಟ್, ಶ್ರೀ| ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್., ಎಡ್ವೋಕೇಟ್, ವೈದ್ಯಗುರು ಎಂ. ಆರ್. ಭಟ್, ದಿ| ಎಮ್. ಎನ್. ಕಾಮತ್, ಶ್ರೀ| ಪಿ. ಎಸ್. ವೆಂಕಟಕೃಷ್ಣ ರಾವ್, ಎಂ. ಎ., ಬಿ. ಟಿ., ಶ್ರೀ| ಎಮ್. ಸುಬ್ರಾಯನ್, ವಿದ್ವಾನ್, ಶ್ರೀ| ಕುಡ್ಪಿ ವಾಸುದೇವ ಶೆಣೈ, ಶ್ರೀ| ಎಲ್. ಎಸ್. ನಾಯಕ, ಡಾ| ಎಸ್. ಪಿ. ಭಟ್, ಡಾ| ವಿ. ಆರ್. ಭಟ್, ಟಿ. ಡಿ. ಡಿ. ಶ್ರೀ| ಜಿ. ಆರ್. ಪಾಂಡೇಶ್ವರ, ಶ್ರೀ| ಅಮ್ಮೆಂಬಳ ಆನಂತಯ್ಯನಾವಡ—ವಿದ್ವಾನ್, ಶ್ರೀ| ಟಿ. ಚಂದ್ರರಾಜಸೆಟ್ಟಿ, ಶ್ರೀ| ಬಿ. ಶಂಕರಭಟ್, ವಿದ್ವಾನ್, "ನವಗಿರಿನಂದ," ಮೊದಲಾದವರು 'ಒಂದಾಣೆ ಮಾಲೆ'ಗೆ ಬರೆಯುತ್ತಿರುವರು.

ಕೆಲವು ಪ್ರಕಟಣೆಗಳು, 32, 36, ಅಥವಾ 40 ಪುಟಗಳಷ್ಟಿರುವುವು ಆದರೆ, ಯಾವ ಪ್ರಕಟಣೆಯೂ ಹೊದಿಕೆ ಕೂಡಿ, ಇಪ್ಪತ್ತು ಪುಟಗಳಿಗಿಂತ ಕಡಿಮೆಯಿರುವುದಿಲ್ಲ.

## ಒಂದಾಣೆ ಮಾಲೆ,
### ಪ್ರಭಾತ ಆಫೀಸು, ರಥಬೀದಿ, ಮಂಗಳೂರು—೧.

Edited, Printed and Published by K. V. Shenoy